



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 29

| ಸಂಪುಟ: ೦೪ ಸಂಚಿಕೆ: ೩ | ಜೂನ್ ೨೦೧೭ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 04 Issue 3 | June 2017 | Pages - 8 | A. Sub. - Rs. 20/- | Editor : Sri. B.R. Ravindranath |




**ಚಂದಾ ವಿವರಗಳು**

ವಾರ್ಷಿಕ ಚಂದಾ
ರೂ. ೨೦/–

ಐದು ವರ್ಷಗಳ ಚಂದಾ
ರೂ. ೧೦೦/–

ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org

## ಕ.ವೆಂ.ರಾಘವಾಚಾರ್, ಡಿ.ವಿ.ಗುಂಡಪ್ಪ ಮತ್ತು ಬಿ.ಎಸ್.ಸಣ್ಣಯ್ಯ ದತ್ತಿ ಕಾರ್ಯಕ್ರಮ

# ಕ.ವೆಂ. ರಾಘವಾಚಾರ್ ಜನ್ಮ ಶತಮಾನೋತ್ಸವ ವರ್ಷ

ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ವಿಜಯನಗರ, ಬೆಂಗಳೂರು ಇಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿರುವ ಡಾ॥ ಬಿ.ಯು.ಸುಮ ಅವರು "ಕನ್ನಡದ ಅನುಭಾವ ಸಾಹಿತ್ಯದ ಹಿನ್ನೆಲೆಯಲ್ಲಿ ಸಾಂಸ್ಕೃತಿಕ ಸ್ತ್ರೀವಾದ" ಎಂಬ ವಿಷಯವನ್ನು ಕುರಿತು ವಿಶೇಷ ಉಪನ್ಯಾಸವನ್ನು ನೀಡಿದರು. 12ನೇ ಶತಮಾನದ ಕಾಲಘಟ್ಟದಿಂದ ಪ್ರಾರಂಭಿಸಿ ಕೆಲವು ವಚನ ಕಾರ್ತಿಯರ ಹಿನ್ನೆಲೆಯಲ್ಲಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ತ್ರೀವಾದದ ತತ್ವಗಳನ್ನು ವಿಸ್ತಾರವಾಗಿ ಪರಿಚಯಿಸಿ, ಪಾಶ್ಚಾತ್ಯರಲ್ಲಿನ ವಿವಿಧ ಸ್ತರಗಳ ಸ್ತ್ರೀವಾದವನ್ನೂ ಉಲ್ಲೇಖಿಸಿ, ನಂತರ ಅನುಭಾವಕ್ಕೆ ಕಾಲಘಟ್ಟದ ಚೌಕಟ್ಟೆಲ್ಲ ಮತ್ತು ಅದು ನಿರಂತರವೆಂಬುದನ್ನು ಕೆಲವು ಉದಾಹರಣೆಗಳಿಂದ ನಿರೂಪಿಸಿದರು. ಬದುಕು ಒಂದು ಸಿದ್ಧಪಡಿಸಿದ ಪಾಠವಲ್ಲ. ಅನುಭಾವದಲ್ಲೂ ಏಕತಾನತೆಯಿಲ್ಲದೆ, ವೈವಿಧ್ಯಮಯವಾಗಿರುವುದನ್ನು ವಚನಗಳಲ್ಲಿ ಕಾಣಬಹುದೆಂದು ಎಂದು ಸೋದಾಹರಣವಾಗಿ ವಿವರಿಸಿದರು.




ಡಾ॥ ವಿಜಯ ಸುಬ್ಬರಾಜ್, ಡಾ॥ ಎನ್. ಆರ್.ಲಲಿತಾಂಬ, ಪ್ರೊ॥ ರಾಮರಾವ್ ಕುಲಕರ್ಣಿ ಮುಂತಾದ ವಿದ್ವಾಂಸರು ವಿಶೇಷ ಉಪನ್ಯಾಸಕ್ಕೆ ಸಂವಾದ ರೂಪದಲ್ಲಿ ವಿಶೇಷ ಪ್ರತಿಕ್ರಿಯೆಯನ್ನೂ ವ್ಯಕ್ತಪಡಿಸಿದ್ದು ಅರ್ಥ ಪೂರ್ಣವಾಗಿತ್ತು.

ಉಪನ್ಯಾಸಕರ ಸಹೋದ್ಯೋಗಿಗಳಾದ ಡಾ॥ ಎನ್.ಆರ್.ಲಲಿತಾಂಬ ಅವರು ಉಪನ್ಯಾಸಕರನ್ನು ಸಭೆಗೆ ಪರಿಚಯಿಸಿದರು. ಪ್ರೊ॥ ಅಬ್ದುಲ್ ಬಷೀರ್ ಅವರು ವಂದನಾರ್ಪಣೆ ನಡೆಸಿಕೊಟ್ಟರು.

## ಸಂಪಾದಕೀಯ

ಸಂಘ ಸಂಸ್ಥೆಗಳಿಗೆ ಕಾರ್ಯಕ್ರಮಗಳನ್ನು ನಡೆಸಲು ಅನುಕೂಲ ಮಾಡಿಕೊಟ್ಟಲ್ಲಿ ಹೆಚ್ಚು ಹೆಚ್ಚು ಸಾರ್ವಜನಿಕರಿಗೆ ಜ್ಞಾನ ಮನರಂಜನೆ ಹಾಗೂ ಭಾಗವಹಿಕೆ ಒದಗಿಸಲು ಅನುಕೂಲವಾಗಬಹುದು ಎಂಬ ಸದುದ್ದೇಶದಿಂದ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ಗಂಭೀರ ಚಿಂತನೆ ನಡೆಸಿ ಬಿ.ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿರುವ ಮೂರು ಸಭಾಂಗಣಗಳ ಸೇವಾ ಶುಲ್ಕಗಳನ್ನು ಗಣನೀಯವಾಗಿ ಇಳಿಸಿದೆ. ಬಹುತೇಕವಾಗಿ ಎಲ್ಲ ಸೇವೆಗಳು ಹಾಗೂ ಉತ್ಪನ್ನಗಳ ದರಗಳು ಏರಿಕೆಗಳನ್ನು ಕಾಣುತ್ತಿರುವ ಈ ಕಾಲದಲ್ಲಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ಈ ಕ್ರಮವನ್ನು ಕೈಗೊಂಡಿರುತ್ತದೆ.

ಜೊತೆಗೆ ಬಿ. ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ನಡೆಯುವ ಕಾರ್ಯಕ್ರಮಗಳಲ್ಲಿ ಹೆಚ್ಚು, ಸುಖಕರವಾಗಿ ಭಾಗವಹಿಸಲು ಸಭಿಕರಿಗೆ ಅನುಕೂಲ ಮಾಡಿಕೊಡುವ ಉದ್ದೇಶದಿಂದ ಎಂವಿಸಿ ಸಭಾಂಗಣದಲ್ಲಿ ಹವಾನಿಯಂತ್ರಕಗಳನ್ನು ಅಳವಡಿಸಲಾಗಿದೆ.

ನಮ್ಮ ಸಭಾಂಗಣಗಳಲ್ಲಿ ನಡೆಯುವ ಕಾರ್ಯಕ್ರಮಗಳಲ್ಲಿ ಇನ್ನೂ ಹೆಚ್ಚು ಆಸಕ್ತರು ಭಾಗವಹಿಸುವುದನ್ನು ಎದುರು ನೋಡುತ್ತಿದ್ದೇವೆ.

ಹೊಂಗನಸು ಪತ್ರಿಕೆಯನ್ನು ಹೆಚ್ಚು ವರ್ಣರಂಜಿತ ಹಾಗೂ ಹೆಚ್ಚು ಉಪಯುಕ್ತವಾಗಿ ಮಾಡಲು ಶ್ರಮಿಸುತ್ತಿದ್ದೇವೆ. ನಿಮ್ಮ ಸಲಹೆಗಳು ಹಾಗೂ ಪ್ರತಿಕ್ರಿಯೆಗಳಿಗೆ ಸ್ವಾಗತ.

ಬಿ.ಆರ್ ರವೀಂದ್ರನಾಥ್
ಸಂಪಾದಕರು.......

### ಜೂನ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಮಾಸ್ತಿ ವೆಂಕಟೇಶ ಐಯ್ಯಂಗಾರ್ | 6–6–1891 |
| ಎ.ಎನ್. ಮೂರ್ತಿರಾವ್ | 16–6–1900 |
| ಸೇಡಿಯಾಪು ಕೃಷ್ಣಭಟ್ಟ | 8–6–1902 |
| ತ.ಸು. ಶಾಮರಾಯರು | 12–6–1906 |
| ಜಯದೇವಿ ತಾಯಿ ಲಿಗಾಡೆ | 23–6–1912 |
| ಸಿದ್ದಯ್ಯ ಪುರಾಣಿಕ | 18–6–1918 |
| ನಿರಂಜನ | 15–6–1929 |

### ಜೂನ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಬಿ. ವೆಂಕಟಾಚಾರ್ಯ | 26–6–1914 |
| ಫ.ಗು. ಹಳಕಟ್ಟಿ | 29–6–64 |
| ಮಾಸ್ತಿ ವೆಂಕಟೇಶ ಐಯ್ಯಂಗಾರ್ | 6–6–1998 |
| ಡಿ. ಆರ್. ನಾಗರಾಜ್ | 12–6–1998 |

## ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಎಂವಿಸೀ ಸಭಾಂಗಣದಲ್ಲಿ ಹವಾನಿಯಂತ್ರಕಗಳ ಅಳವಡಿಕೆ



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಎಂವಿಸೀ ಸಭಾಂಗಣದಲ್ಲಿ ಹವಾನಿಯಂತ್ರಕಗಳನ್ನು ಅಳವಡಿಸಲಾಗಿದೆ. ಈ ಸಭಾಂಗಣವು ಈಗಾಗಲೇ ಸುಸಜ್ಜಿತವಾಗಿರುವ ಈ ಸಭಾಂಗಣದಲ್ಲಿ ನಡೆಯುವ ಸಭೆಗಳಲ್ಲಿ ಭಾಗವಹಿಸುವವರಿಗೆ ಹೆಚ್ಚಿನ ಸೌಲಭ್ಯ ನೀಡಲಾಗಿರುತ್ತದೆ. ಹವಾನಿಯಂತ್ರಕಗಳನ್ನು ದಿನಾಂಕ 03ನೇ ಮೇ 2017ರಂದು ಉದ್ಘಾಟಿಸಲಾಯಿತು.

ಪ್ರಕಟಣೆ

## ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಚೇರಿ ಭಾನುವಾರಗಳಂದು ತೆರೆದಿರುತ್ತದೆ

ದಿನಾಂಕ 7ನೇ ಮೇ 2017ರಿಂದ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಚೇರಿ ಹಾಗೂ ಇತರ ಸೇವೆಗಳು ಭಾನುವಾರದಂದು ಸಾರ್ವಜನಿಕರಿಗೆ, ಸದಸ್ಯರಿಗೆ ಹಾಗೂ ಸಾಹಿತ್ಯಾಸಕ್ತರಿಗೆ ಲಭ್ಯ ಮಾಡಿಕೊಡುವ ಉದ್ದೇಶದಿಂದ ವಾರದ ರಜಾ ದಿನವನ್ನು ಬದಲಿಸಲಾಗಿದೆ. ಇನ್ನು ಮುಂದೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಚೇರಿ ಹಾಗೂ ಇತರ ಸೇವೆಗಳು ಪೂರ್ಣಪ್ರಮಾಣವಾಗಿ ಭಾನುವಾರ ಬೆಳಿಗ್ಗೆ 10.30 ಯಿಂದ ಸಂಜೆ 5.30 ವರೆಗೆ ಲಭ್ಯವಿರುತ್ತದೆ. ಪ್ರತಿ ಮಂಗಳವಾರ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಚೇರಿಗೆ ವಾರದ ರಜೆಯಿರುತ್ತದೆ.

## ಆಧುನಿಕ ವಚನಗಳು

–ಜಿ. ಅಬ್ದುಲ್ ಬಷೀರ್

ಮತಿಯಲ್ಲಿ, ಜೀವನದ ಗತಿಯಲ್ಲಿ, ಜ್ಞಾನದೋಗರದಲ್ಲಿ
ವಿರತಿಯಲ್ಲಿ, ವಿಶ್ವಭ್ರಾತೃತ್ವದಲ್ಲಿ
ಮುಹಮ್ಮದ್ ಬುದ್ಧ ಬಸವರಿಗೆ ಸಮಾನರಾರೋ?
ಭಕ್ತಿಗಾಗಿ, ಸ್ವಾಂತತ್ರ್ಯಕ್ಕಾಗಿ, ಸಮಾನತೆಗಾಗಿ
ಬಡಬಗ್ಗರ ಕಲ್ಯಾಣಕ್ಕಾಗಿ, ಮಹಿಳಾವಿಮೋಚನೆಗಾಗಿ
ಶೋಷಣೆಯ ಟೀಕೆಗಾಗಿ, ಮೂಢನಂಬಿಕೆಗಳ
ಮೂಲೋತ್ಪಾಟನಕ್ಕಾಗಿ,
ತಮ್ಮನ್ನೇ ತೆತ್ತವರು ಏಸು, ನಿಜಗುಣ, ಬಾಲಲೀಲಾ ಮಹಾಂತ!
ಕನಕ ಪುರಂದರ ಗಾಂಧಿ ಅಂಬೇಡ್ಕರ್ ಅಲ್ಲವೇನೋ?
ಇಂಥ ಮನುಕುಲೋದ್ಧಾರಕರ ತತ್ತ್ವಬಿತ್ತಿ,
ಫಲ ನೀಡುವಂತೆ ಕರುಣಿಸೋ 'ಅಲ್ಲರಖಾ'ನಿನ್ನ ಧರ್ಮಾ! ॥20॥

ಹೆಣ್ಣು ಬದುಕೆಂಬರು ಕೆಲರು,
ಹೆಣ್ಣು ಬದುಕಲ್ಲವಯ್ಯಾ!
ಹೊನ್ನು ಬದುಕೆಂಬರು ಕೆಲರು,
ಹೊನ್ನು ಬದುಕಲ್ಲವಯ್ಯಾ!
ಮಣ್ಣು ಬದುಕೆಂಬರು ಕೆಲರು,
ಮಣ್ಣು ಬದುಕಲ್ಲವಯ್ಯಾ!
ಕುಡಿತ ಬದುಕೆಂಬರು ಕೆಲರು,
ಕುಡಿತ ಬದುಕಲ್ಲವಯ್ಯಾ!
ಲಾಟರಿ ಬದುಕೆಂಬರು ಕೆಲರು,
ಲಾಟರಿ ಬದುಕಲ್ಲವಯ್ಯಾ!
ಈ ಎಲ್ಲ ಬದುಕ ಮೀರಿದ್ದು
'ಅಲ್ಲಾರಖಾನ' ಶರಣರ ಸಂಗವಯ್ಯಾ ! ॥21॥

# ಜೂನ್ 2017 ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ

### 07–06–2017 ಬುಧವಾರ ಸಂಜೆ 6–00 ಗಂಟೆಗೆ



**ಗಮಕವಾಹಿನಿ–17**

ಹೆಸರು: ಪಂಪಭಾರತ ಸಂಚಿಕೆ–4

ಮುಂದುವರೆದ ಭಾಗ

ವಾಚನ : ಡಾ॥ ಸುಬ್ರಹ್ಮಣ್ಯ ಸ್ವಾಮಿ

ವ್ಯಾಖ್ಯಾನ : ಶ್ರೀಮತಿ ಟಿ.ಸಿ. ವಿಶಾಖಾ

ನೇತೃತ್ವ– ಶ್ರೀಮತಿ ಸಿ.ವಿ. ಶ್ರೀಮತಿ

### 12–06–2017 ಸೋಮವಾರ ಸಂಜೆ 6–00 ಗಂಟೆಗೆ



**"ಅಕ್ಕರಗೊಟ್ಟಿ"**

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : ರಾವಳೇಶ್ವರ ಆರಾಧನೆ– ರಾವಳೇಶ್ವರ ಒಕ್ಕಲುಗಳು– ಒಂದು ಚಿಂತನೆ

ಚಾಲನೆ: ಡಾ॥ ಎನ್.ಆರ್. ಲಲಿತಾಂಬ

### 15–06–2017 ಗುರುವಾರ ಸಂಜೆ 6–00 ಗಂಟೆಗೆ



**ಕನ್ನಡ ಸಂಸ್ಕೃತಿ ದರ್ಶನ**

ಕನ್ನಡ ಸಾಕ್ಷ್ಯ ಚಿತ್ರ ಪ್ರದರ್ಶನ

### 19–6–2017 ಸೋಮವಾರ ಸಂಜೆ 6–00 ಗಂಟೆಗೆ



**ಸಂಶೋಧನ ದಿನ**

ಎಂ.ಫಿಲ್ ಪದವಿ ಪತ್ರ ಪ್ರದಾನ ಮತ್ತು ಅಧ್ಯಕ್ಷತೆ: ಡಾ॥ ಪದ್ಮಾ ಶೇಖರ್

ಕುಲಪತಿಗಳು ಸಂಸ್ಕೃತ ವಿಶ್ವವಿದ್ಯಾಲಯ

### 24–06–2017 ಶನಿವಾರ ಸಂಜೆ 6–00 ಕ್ಕೆ



**ರಂಗಸಂವಾದ–11**

ನಾಟಕ : ನಮ್ಮನ್ನು ಬದುಕಲು ಬಿಡಿ

ರಚನೆ & ನಿರ್ದೇಶನ : ಶ್ರೀ ವಿಜಯ್ ಎ.

### 28–06–2017 ಬುಧವಾರ ಸಂಜೆ 6–00 ಗಂಟೆಗೆ



**ಶ್ರೀಮತಿ ಜಯಲಕ್ಷ್ಮಮ್ಮ– ಬಾಪು ರಾಮಣ್ಣ ದತ್ತಿ ಉಪನ್ಯಾಸ**

ವಿಷಯ : ಜಲ–ಜನ

ಉಪನ್ಯಾಸಕರು: ಡಾ॥ ವೈ. ಲಿಂಗರಾಜು, ಜಲತಜ್ಞರು

### 29–06–2017 ಗುರುವಾರ ಸಂಜೆ – 6–00 ಗಂಟೆಗೆ



**ಶ್ರೀಮತಿ ಜಯಲಕ್ಷ್ಮಮ್ಮ– ಬಾಪು ರಾಮಣ್ಣ ದತ್ತಿ ಗಮಕ ಕಾರ್ಯಕ್ರಮ**

ವಾಚನ: ಶ್ರೀ ಎಂ.ಆರ್. ಸತ್ಯನಾರಾಯಣ

ವ್ಯಾಖ್ಯಾನ : ಡಾ॥ ಎ.ವಿ. ಪ್ರಸನ್ನ

ಪ್ರಸಂಗ : ಕುಮಾರವ್ಯಾಸ ಭಾರತದ ಶಲ್ಯ ಪರ್ವ

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಏಪ್ರಿಲ್ 2017 – ಮೇ 2017 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

## "ರಂಗ ಸಂವಾದ–8"

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ ನಾಟಕ

ನಾಟಕ : "ಸಂಸ್ಕೃತಿ ಮಾಲಿನ್ಯ"

ರಚನೆ, ನಿರ್ದೇಶನ : ಶ್ರೀ ವಿಜಯ್ ಎ.




ಪ್ರತಿ ತಿಂಗಳೂ ಕೊನೆಯ ಶನಿವಾರ ಸಂಜೆ ನಡೆಯುವ ಬಿ.ಎಂ.ಶ್ರೀ. ಪ್ರತಿಷ್ಠಾನ ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ ನಡೆಸಲಾಗುವ 'ರಂಗ ಸಂವಾದ' ಕಾರ್ಯಕ್ರಮದಲ್ಲಿ ಸಾಮಾಜಿಕ ಚಿಂತನೆಗಳನ್ನು ಒಳಗೊಳ್ಳುವ ನಾಟಕಗಳ ಪ್ರದರ್ಶನ ಮಾಡಲಾಗುತ್ತದೆ. ದಿನಾಂಕ 22ನೇ ಏಪ್ರಿಲ್ 2017ರಂದುನಾಡಿನ ಸಂಸ್ಕೃತಿಯ ಮೇಲೆ ಆಗುತ್ತಿರುವ ಪರಿಣಾಮಗಳ ಬಗ್ಗೆ ಮನ ಮುಟ್ಟುವಂತೆ ಈ ನಾಟಕವನ್ನು ಪ್ರದರ್ಶಿಸಲಾಯಿತು. ಡಾ. ಪಿ ವಿ ನಾರಾಯಣ ಅವರು ಸ್ವಾಗತವನ್ನು ಕೋರಿ ಕಾರ್ಯಕ್ರಮಕ್ಕೆ ಚಾಲನ ನೀಡಿದರು. ರವೀಂದ್ರನಾಥ್ ವಂದನಾರ್ಪಣೆ ಸಲ್ಲಿಸಿದರು.

## ಗಮಕವಾಹಿನಿ–16

03–05–2017 ಹೆಸರು: ಪಂಪಭಾರತ

ವಾಚನ : ಶ್ರೀ ಅಭಿರಾಂ ಭರತ ವಂಶಿ

ವ್ಯಾಖ್ಯಾನ : ಶ್ರೀಮತಿ ನಾಗರತ್ನ ಮೂರ್ತಿ

ನೇತೃತ್ವ– ಶ್ರೀಮತಿ ಸಿ.ವಿ. ಶ್ರೀಮತಿ




03–05–2017ರಂದು ಪ್ರತಿ ತಿಂಗಳ ಮೊದಲ ಬುಧವಾರ ನಡೆಯುವ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನದ ಜಂಟಿ ಕಾರ್ಯಕ್ರಮವಾದ ಗಮಕವಾಹಿನಿ ಅಡಿಯಲ್ಲಿ ಶ್ರೀಮತಿ, ಶ್ರೀಮತಿಯವರ ನೇತೃತ್ವದಲ್ಲಿ "ಪಂಪಭಾರತ– 3" ಗಮಕವಾಹಿನಿ–ಮಾಲೆಯನ್ನು ಹಮ್ಮಿಕೊಂಡಿದೆ. ಪಂಪಭಾರತದ ಸಂಗ್ರಹ ಡಾ॥ ಪಿ.ವಿ.ನಾರಾಯಣ.

ಮೂರನೇ ಕಂತಿನ ಭಾಗವಾಗಿ ಶ್ರೀ ಅಭಿರಾಂ ಭರತ ವಂಶಿ ಸುಶ್ರಾವ್ಯವಾಗಿ ವಾಚನ ಮಾಡಿದರು. ವ್ಯಾಖ್ಯಾನದ ಭಾಗವನ್ನು ವ್ಯಾಖ್ಯಾನದಲ್ಲಿ ಪರಿಣಿತರಾದ ಶ್ರೀಮತಿ ನಾಗರತ್ನ ಮೂರ್ತಿ ಅವರು ನೀಡಿ ಗಮಕಾಸಕ್ತರ ಮೆಚ್ಚುಗೆ ಗಳಿಸಿದರು.

## "ಅಕ್ಕರಗೊಟ್ಟಿ"

ದಿನಾಂಕ 11–5–2017ರಂದು ನಡೆದ "ಅಕ್ಕರಗೊಟ್ಟಿ" ಕಾರ್ಯಕ್ರಮದಲ್ಲಿ ಡಾ॥ ಬಿ.ಸಿ. ರಾಜಕುಮಾರ್, ಕನ್ನಡ ಸಹಾಯಕ ಪ್ರಾಧ್ಯಾಪಕರು, ವಿಜಯಾ ಕಾಲೇಜು, ಪಂಪನ "ಆದಿಪುರಾಣ"ದ 13ನೇ ಆಶ್ವಾಸದ, 15ನೇ ಪದ್ಯದಲ್ಲಿನ "ವಿಜಯಾರ್ಧ" ಎಂಬ ಶಬ್ದವನ್ನು ಕುರಿತು ಚಿಂತನೆ ನಡೆಸಿದರು. ಪ್ರಾರಂಭದಲ್ಲಿ ಈ ಪದ್ಯದ ಸಂದರ್ಭವನ್ನು ಮತ್ತು ವಾಚ್ಯಾರ್ಥವನ್ನೂ ಧ್ವನ್ಯರ್ಥವನ್ನು ಸಭೆಗೆ ತಿಳಿಸಿದರು. ಷಟ್ಖಂಡದ



ಅಧಿಪತಿಯಾದ ಭರತನ ಅಹಂ, ಅಲ್ಪತನ, ಬಾಹುಬಲಿಯೊಂದಿಗಿನ ಮುಖಾಮುಖಿ, ಸಂಘರ್ಷ, ಭೋಗವನ್ನು ಅನುಭವಿಸುವ, ನಂತರ ಗೆಲ್ಲುವ (ತಿರಸ್ಕಾರದಿಂದಲ್ಲ), ಜೈನ ಪುರಾಣದ ಹಿನ್ನಲೆ, ಹೀಗೆ ಹಲವಾರು ಅಂಶಗಳನ್ನು ಸ್ಪಷ್ಟಪಡಿಸಿದರು.

ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದ ವಿದ್ವಾಂಸರ ಸಭೆಯಲ್ಲಿ ಡಾ॥ ನಳಿನೀ ವೆಂಕಟೇಶ್, ಶ್ರೀಮತಿ ಭಾರತಿ, ಡಾ॥ ವಾದಿರಾಜ್, ಡಾ॥ ನಳಿನಾ, ಶ್ರೀ ವೆಂಕಟರಮಣಯ್ಯ ಮತ್ತು ಕೆಲವು ಕಾಲೇಜಿನ ಉಪನ್ಯಾಸಕರು ಅರ್ಥಪೂರ್ಣ ಚರ್ಚೆಗೆ, ಕಾರಣರಾದರು.

ಶ್ರೀ ಗುರುಪ್ರಸಾದ್ ಅವರು ಉಪನ್ಯಾಸಕರಿಗೆ ಹಾಗೂ ಸಭೆಗೆ ವಂದಿಸಿದರು.

## ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ

ದಿನಾಂಕ 10ನೇ ಮೇ 2017ರಂದು ಬುದ್ಧ ಜಯಂತಿ ದಿನವಾಗಿದ್ದು ಆ ಪ್ರಯುಕ್ತ ದಿನಾಂಕ 15–05–2017ರಂದು ಕರ್ನಾಟಕದಲ್ಲಿ ಬೌದ್ಧ ಧರ್ಮದ ಸ್ಥಳಗಳು ಹಾಗೂ ಕರ್ನಾಟಕದಲ್ಲಿ ಬೌದ್ಧ ಧರ್ಮ ಬಗ್ಗೆಯ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು.

# ಸೇವಾ ಶುಲ್ಕ ಕಡಿತ

ಸಂಘ ಸಂಸ್ಥೆಗಳು ನಡೆಸುವ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಲು ಅನುಕೂಲ ಮಾಡಿಕೊಡಲು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸಭಾಂಗಣಗಳ ಸೇವಾ ಶುಲ್ಕ ಗಳನ್ನು ಗಣನೀಯವಾಗಿ ಕಡಿತಗೊಳಿಸಲಾಗಿದೆ

ಸಭಾಂಗಣಗಳ ಸೇವಾ ಶುಲ್ಕವನ್ನು ದಿನಾಂಕ 1-6-2017ರಿಂದ ಜಾರಿಗೆ ಬರುವಂತೆ ಈ ಕೆಳಕಂಡಂತೆ ಪರಿಷ್ಕರಿಸಲಾಗಿದೆ. ಬಳಕೆದಾರರು ಎಂದಿನಂತೆ ಸಹಕರಿಸಬೇಕಾಗಿ ಕೋರಿಕೆ.

**ಸಭಾಂಗಣಗಳ ಸೇವಾ ಶುಲ್ಕದ ವಿವರ**

| | ಎಂವಿಸೀ ಸಭಾಂಗಣ | ಶಾ.ಬಾಲೂರಾವ್ ಮಾತಿನಮನೆ | ತರಗತಿ ಕೊಠಡಿ |
|---|---|---|---|
| **1) ಸೋಮವಾರದಿಂದ ಶುಕ್ರವಾರದವರೆಗೆ** | | | |
| ಬೆಳಿಗ್ಗೆ 10-30 ರಿಂದ 2-00ರ ವರೆಗೆ ಅಥವಾ | 1,000 | 500 | 500 |
| ಮಧ್ಯಾಹ್ನ 3-30 ರಿಂದ 7-00ರ ವರೆಗೆ | 1,000 | 500 | 500 |
| ಬೆಳಿಗ್ಗೆ 10-30 ರಿಂದ ಸಂಜೆ 7-00ರ ವರೆಗೆ | 2,000 | 1,000 | 1,000 |
| **2) ಶನಿವಾರ, ಭಾನುವಾರ ಹಾಗೂ ಸರ್ಕಾರಿ ರಜಾ ದಿನಗಳಲ್ಲಿ** | | | |
| ಬೆಳಿಗ್ಗೆ 10-30 ರಿಂದ 2-00ರ ವರೆಗೆ ಅಥವಾ | 2,500 | 1,000 | 1,000 |
| ಮಧ್ಯಾಹ್ನ 3-30 ರಿಂದ 7-00ರ ವರೆಗೆ | 2,500 | 1,000 | 1,000 |
| ಬೆಳಿಗ್ಗೆ 10-30 ರಿಂದ ಸಂಜೆ 7-00ರ ವರೆಗೆ | 5,000 | 2,000 | 2,000 |

ವಿ.ಸೂಚನೆ: ಎಲ್.ಇ.ಡಿ. ಪ್ರೊಜೆಕ್ಟರ್ ಬಳಕೆಗೆ ರೂ. 250/- ಪ್ರತಿ 3 1/2 ಘಂಟೆಗಳ ಬಳಕೆಗೆ ಹೆಚ್ಚುವರಿ ಶುಲ್ಕ
ಹವಾ ನಿಯಂತ್ರಕ ವ್ಯವಸ್ಥೆ ಬಳಕೆಗೆ ರೂ. 250/- ಪ್ರತಿ 3 1/2 ಘಂಟೆಗಳ ಬಳಕೆಗೆಹೆಚ್ಚುವರಿ ಶುಲ್ಕ

ಸಭಾಂಗಣ ಶುಲ್ಕವನ್ನು ಪೂರ್ಣವಾಗಿ ಪಾವತಿಸಿ ಸಭಾಂಗಣವನ್ನು ಕಾಯ್ದಿರಿಸುವುದು. ಅಲ್ಲದೆ ರೂ. 1,000/-(ರೂ.ಒಂದು ಸಾವಿರ)ವನ್ನು ಮುಂಗಡವಾಗಿ ಕೊಡತಕ್ಕದ್ದು. ಮುಂಗಡ ಹಣವನ್ನು ಕಾರ್ಯಕ್ರಮದ ನಂತರ ಹಿಂತಿರುಗಿಸಲಾಗುವುದು.

ವಿ.ಸೂ : 1) ತಿಂಡಿ-ಪಾನೀಯಗಳನ್ನು ಸಭಾಂಗಣದೊಳಗೆ ಸೇವಿಸಲು ಅನುಮತಿ ಇಲ್ಲ.
2) ಸಭಾಂಗಣಗಳ ಆಸ್ತಿ ಪಾಸ್ತಿಗಳಿಗೆ ಹಾನಿಯಾದಲ್ಲಿ ಸಂಘಟಕರು ಜವಾಬ್ದಾರಿ ವಹಿಸಿಕೊಳ್ಳತಕ್ಕದ್ದು.
3) ಸಂಘಸಂಸ್ಥೆಗಳು ನಡೆಸುವ ಸಾಂಸ್ಕೃತಿಕ ಕಾರ್ಯಕ್ರಮಗಳಿಗಾಗಿ ಮಾತ್ರ ಎಂ.ವಿ.ಸೀ. ಸಭಾಂಗಣವನ್ನು ನೀಡಲಾಗುವುದು.
4) ಕೌಟುಂಬಿಕ ಕಾರ್ಯಕ್ರಮಗಳಿಗೆ ಸಭಾಂಗಣಗಳನ್ನು ನೀಡಲಾಗುವುದಿಲ್ಲ.

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಸ್ಥಾಪಿಸಿರುವ ದತ್ತಿಗಳ ವಿವರ

| ಕ್ರ.ಸಂ | ಹೆಸರು | ಕ್ರ.ಸಂ | ಹೆಸರು |
|---|---|---|---|
| 1 | ಪ್ರೊ॥ ಡಿ.ಎಲ್.ಎನ್. ದತ್ತಿ | 23 | ಶ್ರೀ ಗರಣಿ ವೈಯಾಕರಣಿ ಕೃಷ್ಣಾಚಾರ್ಯ ದತ್ತಿ |
| 2 | ಶ್ರೀಮತಿ ಕಮಲಿನಿ ಶಾ. ಬಾಲೂರಾವ್ ದತ್ತಿ | 24 | ಶ್ರೀ ಶಂಬಾ ಜೋಷಿ ದತ್ತಿ |
| 3 | ಸರ್.ಸಿ.ವಿ. ರಾಮನ್ ಸ್ಮಾರಕ ವಿಜ್ಞಾನ ಉಪನ್ಯಾಸ ದತ್ತಿ | 25 | ಶ್ರೀ ಕಣಕಟ್ಟೆ ಕೃಷ್ಣಮೂರ್ತಿರಾವ್ ಸ್ಮಾರಕ ದತ್ತಿ |
| 4 | ಶ್ರೀ ಬಿ.ಎಸ್. ಗೋಪಾಲರಾವ್ ಮತ್ತು ಶ್ರೀಮತಿ ವೇದವತಿ ಬಾಯಿ ಸ್ಮಾರಕ ದತ್ತಿ | 26 | ಶ್ರೀ ಕೆ.ಪಿ. ರಾವ್ ದತ್ತಿ |
| | | 27 | ಶ್ರೀ ಕೊರಟಿ ಶ್ರೀನಿವಾಸರಾವ್ ದತ್ತಿ |
| 5 | ಶ್ರೀಮತಿ ಜಯಲಕ್ಷಮ್ಮ ಮತ್ತು ಶ್ರೀ ಬಾಪೂ ರಾಮಣ್ಣ ದತ್ತಿ | 28 | ಶ್ರೀ ಸಿ.ಕೆ. ನಾಗರಾಜರಾವ್ ದತ್ತಿ |
| 6 | ಶ್ರೀ ಗೋವಿಂದರಾವ್ ಜಾಲಿಹಾಳ ದತ್ತಿ | 29 | ಡಾ॥ ಎಂ.ಕೆ. ಶೈಲಜ ಆಳ್ವ ಮತ್ತು ಶ್ರೀ ಕೆ. ಮೋಹನದೇವ ಆಳ್ವ ದತ್ತಿ |
| 7 | ಡಾ॥ ಡಿ.ವಿ.ಜಿ. ಸ್ಮಾರಕ ದತ್ತಿ | 30 | ಪಂಡಿತ್ ಓ.ಆರ್. ರಾಮಣ್ಣ ಮತ್ತು ಶ್ರೀಮತಿ ಪುಟ್ಟಮ್ಮ ದತ್ತಿ |
| 8 | ಅನಂತರಂಗ ಸಂಶೋಧನ ಗ್ರಂಥ ದತ್ತಿ | 31 | ಶ್ರೀ ವಿ. ನಾಗರಾಜರಾವ್ ಸಮೂಹ ಮಾಧ್ಯಮ ಪ್ರಶಸ್ತಿ |
| 9 | ಪ್ರೊ॥ ಎನ್.ಅನಂತರಂಗಾಚಾರ್ ಶತಮಾನೋತ್ಸವ ಸಮಿತಿ ದತ್ತಿ | 32 | ಪ್ರೊ॥ ಸೂ.ವೆಂ. ಆರಗ ದತ್ತಿ |
| 10 | ಡಾ॥ ಎಂ.ಎ. ಜಯಚಂದ್ರ ದತ್ತಿ | 33 | ಡಾ॥ ಉಪ್ಪಂಗಳ ರಾಮಭಟ್ಟ ದತ್ತಿ |
| 11 | ಶ್ರೀ ಟಿ.ಎಸ್. ವೆಂಕಣ್ಣಯ್ಯ ದತ್ತಿ | 34 | ಶ್ರೀ ಸಾರಂಗಿ ವೆಂಕರಾಮಯ್ಯ ಶ್ರೀಮತಿ ಪುಟ್ಟಚ್ಚಮ್ಮ ದತ್ತಿ |
| 12 | ಶ್ರೀ ಎಂ.ಜಿ. ನಂಜುಂಡಾರಾಧ್ಯರ ಸ್ಮಾರಕ ದತ್ತಿ | 35 | ಶ್ರೀಮತಿ ಶಾರದಮ್ಮ - ಶ್ರೀ ಹನುಮಯ್ಯ ದತ್ತಿ |
| 13 | ಶ್ರೀ ಎಂ.ಎ. ರಾಮಾನುಜಯ್ಯಂಗಾರ್ ದತ್ತಿ | 36 | ಶ್ರೀ ಸೋಸಲೆ ಅಯ್ಯಾ ಶಾಸ್ತ್ರಿ ದತ್ತಿ |
| 14 | ಶ್ರೀಮತಿ ಸಾವಿತ್ರಮ್ಮ- ಪ್ರೊ. ಎಂ.ವಿ.ಸೀ ಸಾಹಿತ್ಯ ಪುರಸ್ಕಾರ ದ | 37 | ಶ್ರೀಮತಿ ಯಂ.ಕೆ. ವಿಜಯಲಕ್ಷ್ಮಿ - ಶ್ರೀ ಎ. ಸುಬ್ಬಯ್ಯ ಹೆಗಡೆ ಶಾಸ್ತ್ರಿ ದತ್ತಿ |
| 15 | ಶ್ರೀಮತಿ ರುಕ್ಮಿಣಮ್ಮ ಸೀತಾರಾಮರಾವ್ ದತ್ತಿ | 38 | ಪ್ರೊ॥ ತೀ.ನಂ.ಶ್ರೀ. ಸ್ಮಾರಕ ಉಪನ್ಯಾಸ ದತ್ತಿ |
| 16 | ಶ್ರೀಮತಿ ರಂಗನಾಯಕಮ್ಮ ಮತ್ತು ಶ್ರೀ ಜಿ. ಸುಬ್ಬರಾವ್ ಸ್ಮಾರಕ ದತ್ತಿ | 39 | ಪ್ರೊ॥ ಎಂ. ವೀ. ಸೀ. ದತ್ತಿ |
| 17 | ಶ್ರೀ ಕ.ವೆಂ.ರಾಘವಾಚಾರ್ ದತ್ತಿ | 40 | ಪ್ರೊ॥ ಎಲ್.ಎಸ್. ಶೇಷಗಿರಿರಾವ್ ಸಾಹಿತ್ಯ ವಿಮರ್ಶಾ ಪ್ರಶಸ್ತಿ ದತ್ತಿ |
| 18 | ಶ್ರೀ ಸಮೇತನಹಳ್ಳಿ ರಾಮರಾಯರ ದತ್ತಿ | 41 | ಶ್ರೀಮತಿ ಜಯಲಕ್ಷಮ್ಮ- ಶ್ರೀ ಬಿ.ಎಸ್. ಸಣ್ಣಯ್ಯ ದತ್ತಿ |
| 19 | ಶ್ರೀ ರಾಮಚಂದ್ರರಾವ್ ಗಿರಿರಾವ್ ಪಟವಾರಿ ದತ್ತಿ | 42 | ಅ) ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ ದತ್ತಿ |
| 20 | ಶ್ರೀ ವೆಂಕಟರಂಗಪ್ಪ ಸ್ಮಾರಕ ದತ್ತಿ, ಶ್ರೀ ಜಿ.ಪಿ. ರಾಜರತ್ನಂ ಸ್ಮಾರಕ ದತ್ತಿ | | ಆ) ಶಾ. ಬಾಲೂರಾವ್ ಅನುವಾದ ಪ್ರಶಸ್ತಿ ದತ್ತಿ |
| 21 | ಶ್ರೀ ಟಿ.ಎನ್. ಮಹಾದೇವಯ್ಯ ಸ್ಮಾರಕ ದತ್ತಿ | 43 | ಡಾ॥ ವಿಜಯಾ ಸುಬ್ಬರಾಜ್ ಗಣ್ಯ ಲೇಖಕಿ ಪ್ರಶಸ್ತಿ ದತ್ತಿ |
| 22 | ಪ್ರೊ॥ ಡಿ. ಲಿಂಗಯ್ಯನವರ ದತ್ತಿ | | |




ಗಂಡಸು: ಈ ಶಬ್ದವು ಹೆಂಗಸು ಎಂಬಂತೆಯೇ ರೂಪಿತವಾಗಿರುವ ಶಬ್ದವೆಂಬುದು ಸ್ಪಷ್ಟವಾಗಿದೆ: ಗಂಡು+ಕೂಸು=ಗಂಡುಸು<ಗಂಡಸು. ಗಂಡು ಎಂಬುದರ ರೂಪವು ತಮಿಳಿನಲ್ಲಿ ಗಿಂಡ ಎಂದಿದ್ದರೆ, ತುಳು ತೆಲುಗುಗಳಲ್ಲಿ ಗಂಡು ಎಂಬ ರೂಪದಲ್ಲಿದೆ. ಗಂಡು ಎಂಬುದಕ್ಕೆ ಶೌರ್ಯ ಎಂಬುದು ಮೂಲಾರ್ಥ, "ಗಂಡಿನೊಳ್ ಭೀಮಸೇನಂ" ಎಂಬ ಪಂಪನ ಮಾತಿನಲ್ಲಿ ಈ ಅರ್ಥವಿದೆ. ಶೌರ್ಯವು ಗಂಡಿಗೆ ಸಹಜ ಎಂಬ ಭಾವನೆಯಿಂದ ಗಂಡು ಅಥವಾ ಗಂಡಸು ಎಂಬ ಶಬ್ದ ಈ ಅರ್ಥವನ್ನು ಪಡೆದಂತಿದೆ. ಬರಬರುತ್ತ ಗಂಡು ಎಂಬುದಕ್ಕೂ ಗಂಡಸು ಎಂಬುದಕ್ಕೂ ಅರ್ಥವ್ಯತ್ಯಾಸವಾದಂತೆ ಕಾಣುತ್ತದೆ: ಗಂಡಸು ಎಂಬುದು ಸಾಮಾನ್ಯಾರ್ಥವನ್ನು ಹೊಂದಿದ್ದರೆ, ಗಂಡ ಎಂಬುದು ಹೆಣ್ಣೊಬ್ಬಳ ಪತಿ ಎಂಬರ್ಥವನ್ನು ಪಡೆದಿದೆ. ಪಂಪನ 'ಆದಿಪುರಾಣ'ದಲ್ಲಿ "ಕುಲಮುಂ ಚಲಮುಂ ದೊರೆಯುಂ ಕಿಡೆ ಬಾಟ್ವಿಂ ಗಂಡ ರೂಪಿನೊಳ್ ಗಂಡನಲ್ತು ಪೆಂಡತಿಯೆ ವಲಂ" ಎಂಬ ಮಾತಿದೆ. ಇದರಲ್ಲಿನ 'ಗಂಡರೂಪು' ಎಂಬುದಕ್ಕೆ ಗಂಡಸಿನ ಆಕೃತಿ ಎಂದು ಅರ್ಥ.

ಹೆಣ್ಣಿಗೆ ಲಾವಣ್ಯದಂತೆ ಗಂಡಸಿಗೆ ಶೌರ್ಯವೇ ಸೌಂದರ್ಯದ ನೆಲೆ ಎಂಬ ಭಾವನೆಯಿಂದಾಗಿ 'ಗಂಡಗಾಡಿ' ಎಂಬ ಪದ ರೂಪುಗೊಂಡಿತು. ಹಾಗೆಯೇ ಪೌರುಷದಿಂದ ಉಂಟಾಗುವ ಹೆಮ್ಮೆಯನ್ನು ಗಂಡಗರ್ವ ಎಂದು ರನ್ನ ಕರೆಯುತ್ತಾನೆ. [ಈ ಗಂಡಗರ್ವಮುಂ ಅದೆಲ್ಲಿಗೆ ಪೋಯ್ತು]. ಕೆಟ್ಟುದಕ್ಕೆ ಶೌರ್ಯವನ್ನು ಬಳಸಿಕೊಳ್ಳುವುದನ್ನು ಜನ್ನನ 'ಯಶೋಧರ ಚರಿತೆ'ಯಲ್ಲಿ ಗಂಡಗಾಳಿಕೆ – ಗಂಡ+ಕಾಳಿಕೆ  ಎಂದಿರುವಂತೆ ತೋರುತ್ತದೆ (ಪರನೃಪರ ಗಂಡಗಾಳಿಕೆಯನದೇಂ ಕಳೆದನೋ ನೃಪತಿ).ಶೌರ್ಯಸೂಚಕವಾಗಿ ಕೊಡುವ ಬಿರುದು ಅಥವಾ ಆಭರಣವನ್ನು ಗಂಡಪೆಂಡೇರ ಎಂದು ಕರೆಯುತ್ತಿದ್ದ ಉಲ್ಲೇಖಗಳು ಶಾಸನಗಳಲ್ಲಿವೆ. ಶೌರ್ಯದ ಮಾತು 'ಗಂಡವಾತು' ಎನಿಸಿಕೊಳ್ಳುತ್ತದೆ.

ಗಂಡು ಎಂಬುದಕ್ಕೆ ಶೌರ್ಯ ಎಂಬುದರ ಜೊತೆಯಲ್ಲೇ ಧೈರ್ಯ ಎಂಬರ್ಥವೂ ಇದೆ.ಹೀಗಾಗಿ ಧೈರ್ಯಕೆಡುವುದನ್ನು 'ಗಂಡುಗೆಡು' ಎಂದು 'ಪಂಪಭಾರತ'ದಲ್ಲಿ ಕರೆಯಲಾಗಿದೆ. ಹೆಣ್ಣಿಗೆ ಸಹಜವಲ್ಲವೆಂದು ಭಾವಿಸಲಾದ ಶೌರ್ಯ–ಧೈರ್ಯಗಳನ್ನು ಪಡೆದ ಹೆಣ್ಣನ್ನು 'ಗಂಡುಬೀರಿ' ಎನ್ನುವುದು ಸಾಮಾನ್ಯ. ಈ ಆರ್ಥದಲ್ಲೇ 'ಗಂಡವಳ್ತಿ' ಎಂಬ ಮಾತು ಪಂಪಭಾರತದಲ್ಲಿ ಬಳಕೆಗೊಂಡಿದೆ.

=====

ಗಾಳಿ: ಇದು ದೇಶೀ ಪದ; ಪಂಚಭೂತಗಳಲ್ಲಿ ಒಂದಾದ ವಾಯುವನ್ನು ಸೂಚಿಸುತ್ತದೆ. ತೆಲುಗಿನಲ್ಲಿ ಗಾಲಿ, ಮಲಯಾಳಂನಲ್ಲಿ ಕಾಳುಕ, ತುಳುವಿನಲ್ಲಿ ಗಾಲಿ ಅಥವಾ ಗಾಳಿ ಎಂಬ ರೂಪಗಳನ್ನು ಪಡೆಯುತ್ತದೆ. "ಗಾಳಿಗೆ ಮಾತನಾಡುವರು .. .. ಕಾಟಿಕ್ಕೋಟೆಗಳಾಗಿ ಕೂಗುವರದೇಂ ಮಧುಪಾನದ ಸೊರ್ಕು ಸಾಲದೇ" ಎಂಬ ಹೆಂಡಕುಡುಕರನ್ನು ವರ್ಣಿಸುವ ಪದ್ಯವೊಂದು ಹದಿಮೂರನೆಯ ಶತಮಾನದ 'ಸೂಕ್ತಿಸುಧಾರ್ಣವ'ವೆಂಬ ಸಂಕಲ ಗ್ರಂಥದಲ್ಲಿದೆ. ಚೆನ್ನಬಸವಣ್ಣನ ವಚನವೊಂದರಲ್ಲಿ ಗಾಳಿ ಬೀಸುವಾಗಿನ ಸದ್ದನ್ನು "ಗಾಳಿಯ ಸರ" ಎಂದು ವರ್ಣಿಸುತ್ತದೆ [ಸರ=ಧ್ವನಿ, ಕಂಠ]. ಇಂಥ ಗಾಳಿ ಸದ್ದನ್ನು "ಗಾಳಿ ಗಿಱುಕೆನ್ನು" ಎಂದು 'ಹರಿಶ್ಚಂದ್ರ ಕಾವ್ಯ' ವರ್ಣಿಸುತ್ತದೆ."ದೀಪವೂ ನಿನ್ನದೆ, ಗಾಳಿಯೂ ನಿನ್ನದೆ – ಆರದಿರಲಿ ಬೆಳಕು" ಎಂಬ ಸಾಲುಗಳು ಕೆ.ಎಸ್. ನರಸಿಂಹಸ್ವಾಮಿಯವರ 'ಪ್ರಥಮ ರಾಜನಿಗೆ' ಎಂಬ ಕವನದವು.

'ಕಬ್ಬಿಗರ ಕಾವ'ವು ಆಕಾಶವನ್ನು 'ಗಾಳಿವಟ್ಟೆ' [ಗಾಳಿ ಬೀಸುವ ಮಾರ್ಗ] ಎನ್ನುತ್ತದೆ: "ಗಾಳಿವಟ್ಟೆಯೊ ನಡೆವನ ಕಾಯ್ಪು ತಣ್ಣಗಿರೆ". ಈ ಮಾತನ್ನು ಕುವೆಂಪು ತಮ್ಮ 'ಯಮನ ಸೋಲು' ನಾಟಕದಲ್ಲಿ ಬಳಸುತ್ತಾರೆ.ಗಾಳಿ ಬೀಸುವ ಜಾಗವೆಂಬ ಅರ್ಥದಲ್ಲಿ 'ಪುಷ್ಪದಂತಪುರಾಣ'ವು 'ಗಾಳಿವೆಱಗು' ಎಂಬ ಮಾತನ್ನು ಬಳಸುತ್ತದೆ ("ಕಿಱಿದು ಬೇಗಂ ಆ ಗಾಳಿವೆಱಗಿನೊಳು ರಥಮಂ ನಿಲಿಸಿ"). ಗಾಳಿಯ ಮೂಲಕ ವಾಸನೆ ತಿಳಿಯುವುದೇ 'ಗಾಳಿಗೊಳ್' ("ಅದು ಗಾಳಿಗೊಂಡು ಒಂದು ದೆಸೆಗೆ ತಗುಳ್ದೊಡೆ" ಎಂಬುದು 'ವಡ್ಡಾರಾಧನೆ'ಯ ಮಾತು.'ಗಾಳಿವಾತು' ಎಂದರೆ ಬೈಗುಳ ("ಗಾಳಿವಾತೆಂದು ಬೈಗುಳ್" – 'ಶಬ್ದಮಣಿದರ್ಪಣ')."ಸಂಸಾರವೆಂಬುದು ಗಾಳಿಯ ಸೊಡರು" ಎಂಬ ಬಸವಣ್ಣನು 'ಗಾಳಿಯ ಸೊಡರ'ನ್ನು ಅಸ್ಥಿರತೆಯ ಸಂಕೇತವಾಗಿಸಿದ್ದಾನೆ. ಬೇಟೆಯಲ್ಲಿ 'ಮೇಗಾಳಿ' (ಬೇಟೆಯ ಪ್ರಾಣಿಯ ಮೇಲೆ ಹಾದು ಬೇಟೆಯ ಮೃಗದ ಕಡೆಗೆ ಬೀಸುವ ಗಾಳಿ) 'ಕಿಗ್ಗಾಳಿ' (ಬೇಟೆಯ ಮೃಗದ ಮೇಲಿಂದ ಹಾದು ಬೇಟೆಯಾಡುವ ಪ್ರಾಣಿಯ ಕಡೆಗೆ ಬೀಸುವ ಗಾಳಿ) ಎಂಬ ಮಾತುಗಳ ಬಳಕೆಯಿದೆ. 'ಹರಿಶ್ಚಂದ್ರ ಕಾವ್ಯ'ದಲ್ಲಿ "ಮೇಗಾಳಿಯಿಂ ದೂರದಿಂ ತೋಱಿತ್ತನೊಡ್ಡಿ ಕಿಗ್ಗಾಳಿಯಿಂ .. ..ಹುಲಿಯ ಹಾರಯಿಸಿ" ಎಂದು ಮುಂತಾದ ವರ್ಣನೆಯಿದೆ.

'ಗಾಳಿ' ಎಂದರೆ ದೆವ್ವ ಎಂಬರ್ಥವೂ ಇದೆ."ಗಾಳಿ ಸೋಂಕಿದತ್ತು ಪಿಶಾಚಂ ತೊಡರ್ದುದು ಭೂತಂ ಬನ್ನಂಬಡಿಸಿದುದು" ('ಕರ್ಣಾಟಕ ಕಾದಂಬರಿ').ಇದು ಹೂಬಿಟ್ಟ ಹುಣಿಸೆ ಮರದಲ್ಲಿರುತ್ತದೆಂಬ ನಂಬಿಕೆಯಿತ್ತು ("ಪೂತ ಪುಣಿಸೆಯಂ ಗಾಳಿ ಪೊಕ್ಕಂತೆ" –'ಧರ್ಮಾಮೃತ'). 'ಗಾಳಿಗೆ ತೂರು' ಎಂದರೆ ಉದಾಸೀನ ಮಾಡು; 'ಗಾಳಿ ಬಂದಾಗ ತೂರಿಕೊ' ಎಂದರೆ ಅವಕಾಶವಾದಿಯಾಗು ಮುಂತಾದ ಅನೇಕ ನುಡಿಗಟ್ಟುಗಳಲ್ಲದೆ, 'ಗಾಳಿ' ಪೂರ್ವಪದವಾಗುಳ್ಳ 'ಗಾಳಿಗುದುರೆ' 'ಗಾಳಿಗಿರಣಿ' 'ಗಾಳಿಕೋಳಿ' ಎಂಬ ಸಮಾಸಪದಗಳೂ ಬಳಕೆಯಲ್ಲಿವೆ.

## ಜಯಲಕ್ಷ್ಮಮ್ಮ ಬಾಪು ರಾಮಣ್ಣ ದತ್ತಿ

ಶ್ರೀಮತಿ ಜಯಲಕ್ಷ್ಮಮ್ಮ ಹಾಗೂ ಶ್ರೀ ಬಾಪುರಾಮಣ್ಣ ಇವರಿಬ್ಬರೂ ಸಂಗೀತಪ್ರಿಯರು ಹಾಗೂ ಓದುಬರಹಗಳಲ್ಲಿ ಅಪಾರ ಆಸಕ್ತಿ ಉಳ್ಳವರಾಗಿದ್ದವರು.ಶ್ರೀ ಬಾಪುರಾಮಣ್ಣ ಬಿ.ಎಂ.ಶ್ರೀಯವರ ಪಟ್ಟ ಶಿಷ್ಯರಾಗಿದ್ದರು ಹಾಗೂ ಶ್ರೀಯವರ "ಇಂಗ್ಲಿಷ್ ಗೀತೆಗಳ" ಕಾವ್ಯ ರಚನೆಗಳಿಗೆ ಹಿಂದೆಯೇ ರಾಗ ಸಂಯೋಜನೆ ಮಾಡಿ ಹಾಡುತ್ತಿದ್ದವರು. ಅಲ್ಲದೆ 'ಅಶ್ವತ್ಥಾಮನ್' ನಾಟಕದಲ್ಲಿ ಮೇಳನಾಯಕನಾಗಿ ಪಾತ್ರವಹಿಸಿ, ಅದರ ಹಾಡುಗಳಿಗೆಲ್ಲಾ ರಾಗಸಂಯೋಜನೆ ಮಾಡಿ ಹಾಡಿ ಪ್ರಚಾರ ಮಾಡಿದ್ದರು.

ಶ್ರೀಮತಿ ಜಯಲಕ್ಷ್ಮಮ್ಮ ಹಾಗೂ ಶ್ರೀ ಬಾಪುರಾಮಣ್ಣ ಅವರ ಹೆಸರಿನಲ್ಲಿ ಅವರ ಮಕ್ಕಳಾದ ಎಚ್.ಆರ್. ಬಾಪುಸತ್ಯನಾರಾಯಣ, ಎಚ್.ಆರ್. ಲೀಲಾವತಿ, ಎಚ್. ಆರ್. ಬಾಪುಸೋಮಶೇಖರ ಅವರು ಎರಡು ಲಕ್ಷ ರೂಪಾಯಿ ದತ್ತಿಯನ್ನು ಸ್ಥಾಪಿಸಿ ಪ್ರತಿವರ್ಷ ಸಂಗೀತ ಕಾರ್ಯಕ್ರಮ (ಗಮಕ ಅಥವಾ ಸಂಗೀತ) ಅಥವಾ ಉಪನ್ಯಾಸವನ್ನು ಏರ್ಪಡಿಸಲು ಸೂಚಿಸಿರುತ್ತಾರೆ.

## ಸಾಹಿತಿ ವಿಜಯಾ ಸುಬ್ಬರಾಜ್‌ಗೆ ಮನೋಹರಿ ಪಾರ್ಥಸಾರಥಿ ಪ್ರಶಸ್ತಿ

ಡಾ. ವಿಜಯಾ ಸುಬ್ಬರಾಜ್ ನಿವೃತ್ತ ಪ್ರಾಧ್ಯಾಪಕರು ಖ್ಯಾತ ಲೇಖಕರೂ ಆಗಿರುವ ಇವರಿಗೆ, ಕನ್ನಡ ಸಾಹಿತ್ಯ ಪರಿಷತ್ತು ಕೊಡಮಾಡುವ 2017ನೇ ಸಾಲಿನ ಮನುಶ್ರೀ ಪ್ರಶಸ್ತಿಯನ್ನು, ಅವರ ಸಾಹಿತ್ಯ ಸಾಧನೆಯನ್ನು ಗುರುತಿಸಿಕೊಡಲಾಗಿದೆ. ವಿಜಯಾ ಸುಬ್ಬರಾಜ್ ಪ್ರಯೋಗಶೀಲ ಲೇಖಕಿ. ಸಾಹಿತ್ಯದ ಎಲ್ಲಾ ಪ್ರಕಾರಗಳಿಗೂ ಅಮೂಲ್ಯವಾದ ಕೊಡುಗೆಯನ್ನು ನೀಡಿ, ಮೆಚ್ಚುಗೆಗೆ ಪಾತ್ರರಾದ ಇವರಿಗೆ ಮೂವತ್ತಕ್ಕೂ ಹೆಚ್ಚು ಪ್ರಶಸ್ತಿಗಳು ಸಂದಿವೆ. ಕಾವ್ಯ, ನಾಟಕ, ಕಥೆ, ಕಾದಂಬರಿ, ಜೀವನ ಚಿತ್ರಗಳು, ಸಂಶೋಧನೆ, ವಿಮರ್ಶೆ, ಮಕ್ಕಳ ಸಾಹಿತ್ಯ, ಅನುವಾದ ಇತ್ಯಾದಿಯಾಗಿ 75ಕ್ಕೂ ಹೆಚ್ಚಿನ ಕೃತಿಗಳನ್ನು ರಚಿಸಿದ್ದಾರೆ. ಈ ಪ್ರಶಸ್ತಿ ಅವರ ಮುಡಿಗೆ ಮತ್ತೊಂದು ಗರಿಯಾಗಿದೆ. ಇಂಥ ಲೇಖಕಿಗೆ ಸಂದ ಮನುಶ್ರೀ ಪ್ರಶಸ್ತಿಗಾಗಿ ಬಿ.ಎಂ.ಶ್ರೀ ಪ್ರತಿಷ್ಠಾನವು ಅಭಿನಂದಿಸುತ್ತದೆ.

# ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ ಪ್ರಕಟಿಸಿರುವ ಪುಸ್ತಕಗಳ ಕಿರುಪರಿಚಯ

**ಶ್ರೀಕಂಠಯ್ಯ (ಬಿ. ಎಂ) [ಶ್ರೀ ಕಾವ್ಯನಾಮ]**
**ಇಂಗ್ಲಿಷ್ ಗೀತೆಗಳು : ಮೂಲ ಆಂಗ್ಲ ಕವನಗಳೊಂದಿಗೆ**
(ತೃತೀಯ ಮುದ್ರಣ) [ಪ್ರಥಮ 1985, ದ್ವಿತೀಯ 2006]
ಪು.xvi+192 ಬೆಲೆ ರೂ. 100/– 2013

19ನೇ ಶತಮಾನದ ಉತ್ತರ ಭಾಗದಲ್ಲಿ ಇಂಗ್ಲಿಷ್ ಸಾಹಿತ್ಯದ ಪರಿಚಯ ಲಾಭವನ್ನು ಪಡೆದ ಸಾಹಿತಿಗಳು ಜಡಗಟ್ಟಿದ ಸಂಪ್ರದಾಯ ಮಾರ್ಗವನ್ನು ತೊರೆದು ಹೊಸ ಮಾರ್ಗದಲ್ಲಿ ಕಾವ್ಯ ರಚನೆ ಮಾಡಬೇಕು, ಮಾಡಿಸಬೇಕು ಎಂಬ ಉತ್ಕಟವಾದ ಪ್ರೇರಣೆ ಹೊಂದಿದ್ದರು.'ಶ್ರೀ' ಯವರು ಇದೇ ಪಂಕ್ತಿಗೆ ಸೇರಿದವರು, 'ಇಂಗ್ಲಿಷ್ ಗೀತೆಗಳು' ಸಂಕಲನವನ್ನು 1926ರಲ್ಲಿ ಹೊರತಂದರು, ಹೆಸರು ಭಾವ ಮುಂತಾದವು ಕನ್ನಡತನಕ್ಕೆ ಹೊಂದಿಕೆಯಾಗುವಂತೆ ಮಾರ್ಪಾಡಾಗಿದ್ದರೂ, ಪದಪ್ರಯೋಗ, ಶೈಲಿ, ಛಂದಸ್ಸು, ಭಾವಗಳು.... ಮೂಲ ಕವಿಯ ವ್ಯಕ್ತಿತ್ವವನ್ನು ಅನುಸರಿಸಿದೆ. 'ಶ್ರೀ' ಯವರ ಮನಸ್ಸಿಗೆ ಒಪ್ಪಿ ಬಂದ ಇಂಗ್ಲಿಷ್ ಕವಿತೆಗಳನ್ನು ಆಯ್ಕೆಮಾಡಿ ಕನ್ನಡೀಕರಿಸಲಾಗಿತ್ತು. ಪ್ರಸ್ತುತ ಸಂಕಲನದಲ್ಲಿ 60 ಅನುವಾದಿತದ ಕನ್ನಡ ಕವಿತೆಗಳಿದ್ದು ಹಾಗೂ ಅವುಗಳ ಇಂಗ್ಲಿಷ್ ಮೂಲ ರೂಪವನ್ನೂ ಒದಗಿಸಲಾಗಿದೆ.ಇದು ಕನ್ನಡ ನವೋದಯ ಕಾವ್ಯದ ಆಚಾರ್ಯ ಕೃತಿ.

ಲಕ್ಷ್ಮಿ (ಎನ್. ಮೂರ್ತಿ)
**ಧೀಮಂತ ಮಹಿಳೆ ದಿ॥ ನಂಜಮ್ಮ : ವ್ಯಕ್ತಿ ಪರಿಚಯ**
ಕ.96 ಬೆಲೆ ರೂ. 50/– 2012

ಈ ಕೃತಿಯಲ್ಲಿ ಬಿತ್ತಿತವಾಗಿರುವ ಮಹಿಳೆ ಶ್ರೀಮತಿ ನಂಜಮ್ಮ ಕನ್ನಡ ಕಣ್ವ ಶ್ರೀ ಬಿ.ಎಂ.ಶ್ರೀ ಅವರ ಸೋದರಿ. ಹತ್ತು ಮಕ್ಕಳನ್ನು ಹೆತ್ತು ವಿಧವೆಯಾದ ಅಸಹಾಯಕ ಮಹಿಳೆ. ಬ್ರಾಹ್ಮಣ ವಿಧವೆ ಮುಂಡನ ಮಾಡಿಸಿಕೊಂಡು ಇರಬೇಕಾದ ವಾತಾವರಣದಲ್ಲಿ ಅಣ್ಣ ಬಿ.ಎಂ.ಶ್ರೀಯವರ ಆದೇಶ ಕ್ರೂರ ವಿಧಿಗೆ ಒಳಗಾಗದಂತೆ ತಡೆಯಿತು.ಸಮಾಜದ ಕೊಂಕಿನ ನುಡಿ, ಕುಹಕ, ಕೆಂಗಣ್ಣುಗಳಿಗೆ ಮಣಿಯದೆ ಧೈರ್ಯದಿಂದ ಎದುರಿಸಿದ್ದಲ್ಲದೆ ಇನ್ನಿತರ ನಿರಾಧಾರ ಮಹಿಳೆಯರಿಗೂ ಸಮಾಜದಲ್ಲಿ ಗೌರವದಿಂದ ಬಾಳುವ ದಾರಿದೀಪ ತೋರಿದರು. ನಂಜಮ್ಮನವರ ಕಾರ್ಯ ಸಾಧನೆಯ ವೈವಿಧ್ಯತೆ, ವ್ಯಾಪಕತೆ, ಶ್ರದ್ಧೆ ಇವುಗಳನ್ನು ಕೃತಿಯ ಲೇಖಕ ನಂಜಮ್ಮನವರ ಮರಿಮಗಳು ಸವಿವರವಾಗಿ ಚಿತ್ರಿಸಿದ್ದಾರೆ.

ಸತ್ಯ ನಾರಾಯಣರಾವ್ (ಹೂ. ರಾ) ಸಂ.
**ಕವಿಗಳು ಕಂಡ ಬಿ.ಎಂ.ಶ್ರೀ : ವಿವಿಧ ಕವಿಗಳ ಕವನ ಸಂಕಲನ**
ಪು.ಥು+100 ಬೆಲೆ ರೂ 80/– 2012

ಆಚಾರ್ಯ ಬಿ.ಎಂ.ಶ್ರೀ ಯವರ ಮೇರು ವ್ಯಕ್ತಿತ್ವ, ಪಾಂಡಿತ್ಯ, ಸೃಜನ ಶೀಲತೆ, ಕಲ್ಪನಾಶ್ರೀಮಂತಿಕೆ, ಅಸಾಧಾರಣ ಸಾಹಿತ್ಯ ಸೃಷ್ಟಿ ಅನುಪಮ, 'ಶ್ರೀ' ಯವರು ಬರೆದದ್ದು ಕಡಿಮೆ ಆದರೆ ಅವರ ಕಾವ್ಯ, ನಾಟಕ, ಗದ್ಯಬರಹ, ಮುಂದಿನ ವೇಳೆಗೆಗೆ ಮಾರ್ಗದರ್ಶಿಯಾಗಿತ್ತು. 'ಬಿ.ಎಂ.ಶ್ರೀ ಯವರನ್ನು ಕುರಿತು ಹಿರಿಯ ಕಿರಿಯ ಕವಿಗಳಿಂದ ರಚಿತವಾದ ಆಯ್ದ ಕವನಗಳ ಸಂಗ್ರಹ ಈ ಕೃತಿ.

ಲಿಂಗಯ್ಯ (ಡಿ)
**ಕನ್ನಡ ನವೋದಯ ಪ್ರವರ್ತಕ ಬಿ.ಎಂ. ಶ್ರೀಕಂಠಯ್ಯ:**
ವ್ಯಕ್ತ ಪರಿಚಯ ಮತ್ತು ಸೂಕ್ತಗಳು (ಎರಡನೇ ಮುದ್ರಣ) [ಪ್ರಥಮ ಮುದ್ರಣ 2005]
ಪು.50 ಬೆಲೆ ರೂ. 30/– 2012

ಬಿ. ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಬೆಳ್ಳೂರು ಶಾಖೆಯ ಮಹಾಪೋಷಕರಾದ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಯವರ ಆಶಯದಂತೆ ರಚಿಸಿರುವ ಕಿರು ಪುಸ್ತಕ ಇದು. ಬಿ. ಎಂ.ಶ್ರೀಯವರನ್ನು ಕುರಿತು ಸಂಕ್ಷಿಪ್ತವಾದ ವಿದ್ವತ್ ಪೂರ್ಣ ಲೇಖನವಲ್ಲದೆ. ಅವರ ಆಯ್ದ ಸೂಕ್ತಗಳು ಜೀವನ ಮೈಲಿಗಲ್ಲುಗಳು ಹಾಗೂ ಅವರ ಕೃತಿಗಳ ಮಾಹಿತಿ ಒದಗಿಸಲಾಗಿದೆ.

ಆಚಾರ್ಯ (ವಿ.ಎಸ್. ಎಸ್) ಸಂ.
**ಶ್ರೀ ಕೃಷ್ಣ ದೇವರಾಯನ ದಿನಚರಿ.**
(ಪ್ರಧಾನ ಸಂಪಾದಕರು : ಎಂ. ವಿ. ಸೀತಾರಾಮಯ್ಯ)
ಪು.92 ಬೆಲೆ ರೂ. 80/– 2013

ದೇಶದ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಇತಿಹಾಸ ರಚನೆಯಲ್ಲಿ ಶಿಲಾಶಾಸನಗಳು, ನಾಣ್ಯಗಳು, ಮಾಸ್ತಿ ವೀರಗಲ್ಲುಗಳು, ತಾಡವೋಲೆ, ಭೂರ್ಜ ಪತ್ರ, ಪ್ರಾಚೀನ ಹಸ್ತ ಪ್ರತಿಗಳು, ಬಖೈರುಗಳೂ ಇತ್ಯಾದಿಗಳ ಪಾತ್ರ ಗುರುತರವಾದದ್ದು, ವಿಜಯನಗರ ಕೃಷ್ಣ ದೇವರಾಯನ ದಿನಚರಿಯ ವಿವರಗಳನ್ನು ತಾಳೆಗರಿ ಹಸ್ತ ಪ್ರತಿಯಲ್ಲಿ ನಮೂದಿಸಲಾಗಿತ್ತು. ಇದನ್ನು ಮುಕ್ಕು ತಿಮ್ಮಯ್ಯ ಮತ್ತು ಮಾದಯ್ಯನವರ ಮಲ್ಲಯ್ಯ ಎಂಬುವರು ರಾಜಾಜ್ಞೆಯಂತೆ ಬರೆದಿದ್ದಾರೆ. ಲಿಪಿ ಮತ್ತು ಭಾಷೆಯ ಆಧಾರದ ಮೇಲೆ ಇದು ಬಹುಶಃ ಕ್ರಿ. ಶ. 16ನೇ ಶತಮಾನದ ಕನ್ನಡದಲ್ಲಿರುವ ತಾಳೆಯೋಲೆ ಗ್ರಂಥವೆನ್ನಬಹುದು. ಶ್ರೀ ರಾಮಾನುಜಾಚಾರ್ಯರ ವಂದನೆಯಿಂದ ಆರಂಭವಾಗುವ ಈ ಗ್ರಂಥದಲ್ಲಿ ಅರಸನ ದಿನ ನಿತ್ಯದ ಕಾರ್ಯಗಳನ್ನು ನಮೂದಿಸಲಾಗಿದೆ.

ಗೋವರ್ಧನ (ಸುಂಕಂ) ಮತ್ತು ಶ್ಯಾಮಲರತ್ನ ಕುಮಾರಿ (ಬೆಂ. .....)
**ಹಸ್ತಪ್ರತಿ ಅಧ್ಯಯನ : ಸಮಾವೇಶ ಸಂಪುಟ 1**
ಪು.224 ರೂ. 100/– 2012

ಹಸ್ತ ಪ್ರತಿ ಎಂದರೆ ಕೈಬರಹ, ಪುಸ್ತಕ, ಗ್ರಂಥ ಎಂಬರ್ಥವಿದೆ, ಮುದ್ರಣ ಮಾಧ್ಯಮ ಇಲ್ಲದಾಗ ವಿದ್ವಾಂಸರು ತಮ್ಮ ಚಿಂತನೆಗಳನ್ನು ಎಲೆ, ಕಾಗದಗಳ ಮೇಲೆ ಬರೆದರು, ಹಸ್ತ ಪ್ರತಿಗಳು ದೇಶದ ಸಾಂಸ್ಕೃತಿಕ ಸಂಪತ್ತಿನ ಪ್ರತೀಕಗಳು ಎಂದರೆ ತಪ್ಪಾಗಲಾರದು ಮಾರ್ಚ್ 26, 2011 ರಂದು ಉಜಿರೆಯಲ್ಲಿ ನಡೆದ ಪ್ರಥಮ ರಾಷ್ಟ್ರೀಯ ಹಸ್ತಪ್ರತಿ ಸಮಾವೇಶದಲ್ಲಿ ಮಂಡಿತವಾದ 25 ಸಂಶೋಧನಾ ಪ್ರಬಂಧಗಳಲ್ಲಿ 23 ಲೇಖನಗಳು ಮಾತ್ರ ಈ ಸಂಪುಟದಲ್ಲಿ ಪ್ರಕಟವಾಗಿವೆ. ಇದುವರೆಗೂ ದೊರಕದೇ ಇದ್ದ ಹೊಸ ಹಸ್ತ ಪ್ರತಿಗಳನ್ನು ಪರಿಚಯಿಸಲಾಗಿದೆ. ಗ್ರಂಥ ಸಂಪಾದನೆಯ ಕಾರ್ಯದ ಬಗ್ಗೆ ವಿವೇಚಿಸಲಾಗಿದೆ. ಲಿಪಿಯ ಬಗ್ಗೆ, ಚಿತ್ರಿಕಲೆಯ ಮಾಡಲಾಗಿದೆ ಹಿರಿಯ ಕಿರಿಯ ಸಂಶೋಧಕರಾ ಬರೆದಿರುವ ಈ ಲೇಖನಗಳು ಹಸ್ತಪ್ರತಿ ಅಧ್ಯಯನಾಭಿಲಾಷಿಗಳಿಗೆ ಸಾಕಷ್ಟು ಉಪಯುಕ್ತ ಮಾಹಿತಿ ಒದಗಿಸುತ್ತದೆ.



## ಡಾ.ಎಂ.ಕೆ.ಎಲ್.ಎನ್. ಶಾಸ್ತ್ರಿ ನಿಧನ

ಬೆಂಗಳೂರು: ದಿ ಮಿಥಿಕ್ ಸೊಸೈಟಿಯ ಗೌರವಾಧ್ಯಕ್ಷ ಡಾ.ಎಂ.ಕೆ.ಎಲ್.ಎನ್. ಶಾಸ್ತ್ರಿ (85) ಶನಿವಾರ ಬೆಳಗ್ಗೆ ನಿಧನರಾದರು. ಭಾರತೀಯ ವಿಜ್ಞಾನ ಮಂದಿರದಲ್ಲಿ ಅಧ್ಯಯನ ಮಾಡಿದ್ದ ಡಾ.ಶಾಸ್ತ್ರಿ, ಖರಗ್ಪುರದ ಐಐಟಿ ಮತ್ತು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದರು. ಜತೆಗೆ, ಯುವಿಸಿಇ ಕಾಲೇಜಿನ ಪ್ರಾಂಶುಪಾಲರಾಗಿಯೂ ಸೇವೆ ಸಲ್ಲಿಸಿದ್ದರು. 4 ದಶಕಗಳಿಗೂ ಹೆಚ್ಚು ಕಾಲ ದಿ ಮಿಥಿಕ್ ಸೊಸೈಟಿಯೊಂದಿಗೆ ನಿಕಟ ಸಂಬಂಧ ಹೊಂದಿದ್ದರು. ಮಿಥಿಕ್ ಸೊಸೈಟಿಯ ಕಾರ್ಯದರ್ಶಿಯಾಗಿ 3 ದಶಕ ಕಾರ್ಯನಿರ್ವಹಿಸಿದ್ದು, 12 ವರ್ಷಗಳಿಂದ ಗೌರವಾಧ್ಯಕ್ಷರಾಗಿದ್ದರು.

ಡಾ.ಎಂ.ಕೆ.ಎಲ್.ಎನ್. ಶಾಸ್ತ್ರಿ ಅವರು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಭಿಮಾನಿಯಾಗಿದ್ದು ದಿ ಮಿಥಿಕ್ ಸೊಸೈಟಿ ಹಾಗೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಹಲವಾರು ಜಂಟಿ ಕಾರ್ಯಕ್ರಮಗಳನ್ನು ನಡೆಸಿರುತ್ತವೆ.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಅವರಿಗೆ ಶ್ರದ್ಧಾಂಜಲಿ ಸಲ್ಲಿಸುತ್ತದೆ.

## ಕರ್ನಾಟಕ ಲೋಚನ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಪ್ರಕಟಿಸುವ ಷಾಣ್ಮಾಸಿಕ ವಿದ್ವತ್ ಪತ್ರಿಕೆ ಕರ್ನಾಟಕ ಲೋಚನ ಪತ್ರಿಕೆಗೆ ಸಾಹಿತ್ಯ–ಸಂಸ್ಕೃತಿಗೆ ಸಂಬಂಧಿಸಿದ ವಿಮರ್ಶಾತ್ಮಕ/ಸಂಶೋಧನಾತ್ಮಕ ಲೇಖನಗಳನ್ನು ವಿದ್ವಾಂಸರಿಂದ ಆಹ್ವಾನಿಸಿದೆ. ಲೇಖಕರು ತಮ್ಮ ಲೇಖನಗಳನ್ನು ಹಸ್ತಪ್ರತಿ ಅಥವಾ ಬೆರಳಚ್ಚು ರೂಪದಲ್ಲಿ ಪ್ರತಿಷ್ಠಾನದ ವಿಳಾಸಕ್ಕೆ ರವಾನಿಸಬಹುದು ಅಥವಾ bmsrilochana@gmail.comಗೆ ಈ ಮೈಲ್ ಮೂಲಕ ರವಾನಿಸಬಹುದು.

### ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ

ಪ್ರತಿಷ್ಠಾನವು ಪ್ರಕಟಿಸುತ್ತಿರುವ ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ ವಿವರ: ವಾರ್ಷಿಕ ರೂ. 100/– (ವರ್ಷದಲ್ಲಿ ಎರಡು ಸಂಚಿಕೆಗಳನ್ನು ಪ್ರಕಟಿಸಲಾಗುತ್ತಿದೆ) ಆಜೀವ ಚಂದಾ ರೂ. 1500/– ಆಗಿರುತ್ತದೆ. ಎಲ್ಲಾ ಸಾಹಿತ್ಯಾಸಕ್ತರೂ ಈ ವಿದ್ವತ್ ಪತ್ರಿಕೆಗೆ ಚಂದಾದಾರಾಗಬೇಕೆಂದು ಕೋರುತ್ತೇವೆ.

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2015-2017
Office of Posting: Bangalore PSO, Bangalore 560026
Price :Annual Subscription Rs. 20/-
Date of publishing and Posting : 30-05-2017

## ೨೦೧೭ ಮೇ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ವಿವಿಧ ಹಂತದ ಸಂರಕ್ಷರಣಾ ಕಾರ್ಯವು ನಡೆಯುತ್ತಿದೆ. ೨೦೧೭ರ ಮೇ ತಿಂಗಳಿನಲ್ಲಿ ೧ ಗ್ರಂಥಗಳ ಶುಷ್ಕ ಶುದ್ಧೀಕರಣ, ೪ ಗ್ರಂಥಗಳಲ್ಲಿ ಪತ್ರಗಳ ಮರುಜೋಡಣೆ ಕಾರ್ಯ, ೪ ಗ್ರಂಥಗಳಿಗೆ ಅಟ್ಟೆಕಟ್ಟಿದ ಕಾರ್ಯ, ೧ ಗ್ರಂಥಗಳಿಗೆ ಬಟ್ಟೆ ಕಟ್ಟುವಿಕೆ ಕಾರ್ಯ , ಮತ್ತು ೪ ಗ್ರಂಥಗಳಿಗೆ ಸೂಚಿಯನ್ನು ತಯಾರಿಸಿದೆ. ೨೦೬೪ ಕಾಗದದ ಪುಟಗಳನ್ನು ಸ್ಕಾನ್ ಮಾಡಲಾಗಿದೆ.

## ಪದಾಧಿಕಾರಿಗಳ ಮೊಬೈಲ್ ನಂಬರುಗಳು

| | | |
|---|---|---|
| ಪ್ರೊ॥ ಎಂ.ಎಚ್. ಕೃಷ್ಣಯ್ಯ | – | 9945658885 |
| ಡಾ॥ ಪಿ.ವಿ.ನಾರಾಯಣ | – | 9900196517 |
| ಪ್ರೊ॥ ಜಿ.ಅಬ್ದುಲ್ ಬಷೀರ್ | – | 9008763336 |
| ಶ್ರೀ ಬಿ.ಆರ್. ರವೀಂದ್ರನಾಥ್ | – | 9448366849 |
| ಡಾ॥ ಎಸ್. ಅನಿಲ್‌ಕುಮಾರ್ | – | 9964465956 |

## ಕೋರಿಕೆ :

ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. 20/ – ಆಗಿದ್ದು ಐದು ವರ್ಷಗಳ ಚಂದಾಹಣ ರೂ, 100/– ಮಾತ್ರ. ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ–ಅಂಚೆ

ಶ್ರೀಮತಿ/ಶ್ರೀ..........................................................................

..........................................................................

..........................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭